# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 84
ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 02-03-2020.
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ 1995ನೇ ಸಾಲಿನಿಂದ 2001ನೇ ಸಾಲಿನವರೆಗೆ ಪ್ರಾರಂಭವಾಗಿರುವ ಅನುದಾನರಹಿತ ಕನ್ನಡ ಮಾಧ್ಯಮ ಪ್ರಾಥಮಿಕ ಶಾಲೆ, ಪ್ರೌಢ ಶಾಲೆ ಮತ್ತು ಪದವಿ ಪೂರ್ವ ಕಾಲೇಜುಗಳ ಸಂಖ್ಯೆ ಎಷ್ಟು? | 1995ನೇ ಸಾಲಿನಿಂದ 2001ನೇ ಸಾಲಿನವರೆಗೆ ಪ್ರಾರಂಭವಾಗಿರುವ ಅನುದಾನರಹಿತ ಕನ್ನಡ ಮಾಧ್ಯಮ ಪ್ರಾಥಮಿಕ ಶಾಲೆ, ಪ್ರೌಢ ಶಾಲೆಗಳ ಸಂಖ್ಯೆ:-<br>**ಪ್ರಾಥಮಿಕ ಶಾಲೆಗಳು**: 710; **ಪ್ರೌಢ ಶಾಲೆಗಳು**: 370; **ಪದವಿ ಪೂರ್ವ ಕಾಲೇಜು**: 186 |
| ಆ. | ಈ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ/ಬೋಧಕೇತರರಿಗೆ ಕನಿಷ್ಠ ವೇತನ ನೀಡಲಾಗುತ್ತಿದೆಯೇ; | ನೀಡಲಾಗುತ್ತಿದೆ. |
| ಇ. | ಈ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವವರಿಗೆ ಸೇವಾ ಭದ್ರತೆ ಇಲ್ಲದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅನುದಾನರಹಿತ ಖಾಸಗಿ ಪದವಿ ಪೂರ್ವ ಕಾಲೇಜುಗಳ ನೌಕರರಿಗೆ ಸಂಬಂಧಿಸಿದಂತೆ ಕೆಲವು ಸೇವಾ ಭದ್ರತೆ ಹಾಗೂ ಸೇವಾ ಸೌಲಭ್ಯಗಳನ್ನು ನೀಡಲು ಸರ್ಕಾರದ ಆದೇಶ ಸಂಖ್ಯೆ:ಇಡಿ 104 ಎಸ್‌ಇಪಿ 2005 ದಿನಾಂಕ:12-01-2006ರನ್ವಯ ಆಸ್ಪದ ಕಲ್ಪಿಸಲಾಗಿದೆ. ಅದರಂತೆ, ಪದವಿ ಪೂರ್ವ ಶಿಕ್ಷಣ ನಿರ್ದೇಶನಾಲಯದ ಸುತ್ತೋಲೆ ದಿನಾಂಕ: 11-10-2006 ಮತ್ತು ದಿನಾಂಕ:03-11-2008, ದಿನಾಂಕ:30-06-2009 ಹಾಗೂ ದಿನಾಂಕ:12-07-2010ರಲ್ಲಿ ಖಾಸಗಿ ಅನುದಾನರಹಿತ ಶಿಕ್ಷಣ ಸಂಸ್ಥೆಗಳು ಸದರಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುವಂತೆ ಎಲ್ಲಾ ಖಾಸಗಿ ಅನುದಾನರಹಿತ ಪದವಿ ಪೂರ್ವ ಕಾಲೇಜುಗಳ ಆಡಳಿತ ಮಂಡಳಿಗಳಿಗೆ ಸೂಚಿಸಲಾಗಿದೆ.<br><br>Karnataka Education Institutions [certain terms and conditions of service of employees in private un-aided Primary and Secondary and Pre-university Education; Institutions] Rules-2005ರ ನಿಯಮದಂತೆ ಖಾಸಗಿ ಅನುದಾನರಹಿತ ಶಾಲೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶಿಕ್ಷಕರುಗಳಿಗೆ ಸೇವಾಭದ್ರತೆ ಸೌಲಭ್ಯಗಳನ್ನು ಕಡ್ಡಾಯವಾಗಿ ಒದಗಿಸಬೇಕಾಗಿದೆ. ಅದರಂತೆ ಅನುದಾನರಹಿತ ಶಾಲೆಗಳಲ್ಲಿನ ಸಿಬ್ಬಂದಿಗಳಿಗೆ ವೇತನವನ್ನು ತತ್ಸಮಾನ ಸರ್ಕಾರಿ ಸೇವೆಯಲ್ಲಿನ ಸಿಬ್ಬಂದಿಗಳ ಕನಿಷ್ಠ ಮೂಲ ವೇತನ |

| | | |
|---|---|---|
| | | ಸಮಾನವಾದಂತಹ ವೇತನವನ್ನು ನೀಡಬೇಕೆಂಬ ಮಾನ ದಂಡವನ್ನು ರೂಪಿಸಲಾಗಿದೆ.<br><br>ಕರ್ನಾಟಕ ಶಿಕ್ಷಣ ಕಾಯ್ದೆ-1983ರ ಸೆಕ್ಷನ್-89, 90ರಲ್ಲಿ ಪ್ರಸ್ತಾಪಿಸಿರುವಂತೆ ಅಗತ್ಯ ಸೇವಾ ಸೌಲಭ್ಯಗಳನ್ನು ಒದಗಿಸದೇ ನಿಯಮಗಳನ್ನು ಉಲ್ಲಂಘಿಸಿದ್ದಲ್ಲಿ ಶಾಲೆಗಳ ವಿರುದ್ಧ ವಿಚಾರಣೆಯನ್ನು ನಡೆಸಿ ದಂಡ ವಿಧಿಸುವಂತಹ ಅಧಿಕಾರವನ್ನು ಜಿಲ್ಲಾ ಶಿಕ್ಷಣ ನಿಯಂತ್ರಣ ಪ್ರಾಧಿಕಾರ [DERA]ಕ್ಕೆ ನೀಡಲಾಗಿದ್ದು, ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 21 ಶಾಸನ 2017, ದಿನಾಂಕ:22.04.2017 ರಲ್ಲಿ ಸೆಕ್ಷನ್-125ನ್ನು ಸೇರ್ಪಡೆ ಮಾಡಲಾಗಿದೆ.<br>"125A .Penakty for contravention of section 88, 89 and 90- Any educational institution if found guilty of contravention of either of sections 88, 89 and 90 in an enquiry conducted, after giving an opportunity of being heard, by District Education Regulatory Authority, it shall impose a penalty which may extend to five lakh rupees." |
| ಈ. | ಈ ಸಂಸ್ಥೆಗಳಲ್ಲಿನ ಬೋಧಕ/ ಬೋಧಕೇತರರಿಗೆ ವೇತನಾನುದಾನ ನೀಡಲು ಅವಶ್ಯವಿರುವ ಅಂದಾಜು ಮೊತ್ತವೆಷ್ಟು; | 1995 ನೇ ಸಾಲಿನಿಂದ 2001 ನೇ ಸಾಲಿನವರೆಗೆ ಪ್ರಾರಂಭವಾಗಿರುವ ಖಾಸಗಿ ಅನುದಾನ ರಹಿತ ಪ್ರಾಥಮಿಕ ಶಾಲೆ, ಪ್ರೌಢಶಾಲೆ ಹಾಗೂ ಪದವಿ ಪೂರ್ವ ಕಾಲೇಜುಗಳ ಸಿಬ್ಬಂದಿಯನ್ನು ವೇತನಾನುದಾನಕ್ಕೆ ಒಳಪಡಿಸಿದಲ್ಲಿ ಬೇಕಾಗಿರುವ ಅನುದಾನದ ಮೊತ್ತದ ಬಗ್ಗೆ ಮಾಹಿತಿ ಸಂಗ್ರಹಿಸಲಾಗುತ್ತಿದೆ. |
| ಉ. | ಸದರಿಯವರುಗಳಿಗೆ ವೇತನಾನುದಾನ ನೀಡಲು ಸರ್ಕಾರ ಇದುವರೆವಿಗೆ ಕೈಗೊಂಡ ಕ್ರಮಗಳೇನು? | ಆರ್ಥಿಕ ಹೊರೆಯ ಮಾಹಿತಿ ಅಂತಿಮಗೊಂಡ ನಂತರ ಪರಿಶೀಲಿಸಿ, ಈ ಬಗ್ಗೆ ಆರ್ಥಿಕ ಇಲಾಖೆಯ ಸಮಾಲೋಚನೆ ನಂತರ ಸೂಕ್ತ ತೀರ್ಮಾನ ಕೈಗೊಳ್ಳಲಾಗುವುದು. |

**ಇಡಿ 36 ಪಿಎಂಸಿ 2020**

**[ಎಸ್.ಸುರೇಶ್ ಕುಮಾರ್]**
**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**